## ಸೂ. 4 112. ಅಲ್ ಇಖ್‌ಲಾಸ್ ರು. 1

سُورَةُ الْإِخْلَاصِ مَكِّيَّةٌ — آيَاتُهَا ٤ — رُكُوعُهَا ١

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಹೇಳಿರಿ-[1] ಅವನು ಅಲ್ಲಾಹನು[2] ಏಕೈಕನು.[3]

قُلْ هُوَ اللّٰهُ اَحَدٌ ۚ ①

2. ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು.

اَللّٰهُ الصَّمَدُ ۚ ②

3. ಅವನಿಗೆ ಯಾವುದೇ ಸಂತಾನವಿಲ್ಲ, ಅವನು ಯಾರ ಸಂತಾನವೂ ಅಲ್ಲ-

لَمْ يَلِدْ ۙ وَلَمْ يُوْلَدْ ۙ ③

4. ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ.

وَلَمْ يَكُنْ لَّهٗ كُفُوًا اَحَدٌ ④

---

1. ಬಹುದೇವಾರಾಧಕರು ಮತ್ತು ಸತ್ಯನಿಷೇಧಿಗಳು ಪ್ರವಾದಿವರ್ಯರೊಡನೆ(ಸ), 'ತಮ್ಮ ಪ್ರಭು ಮತ್ತು ಇತರೆಲ್ಲಾ ಆರಾಧ್ಯರುಗಳನ್ನು ಬಿಟ್ಟು ತಾವು ಪರಿಚಯಿಸುವ ಆ ಏಕೈಕ ಆರಾಧ್ಯ ಹೇಗಿದ್ದಾನೆ? ಅವನ ವಂಶ ಯಾವುದು? ಯಾವುದರಿಂದ ಸೃಷ್ಟಿಸಲ್ಪಟ್ಟಿದ್ದಾನೆ? ಯಾರಿಂದ ಅವನು ನಿಸರ್ಗದ ವಾರೀಸುದಾರಿಕೆಯನ್ನು ಪಡೆದಿದ್ದಾನೆ ಮತ್ತು ನಂತರ ಯಾರು ಅವನ ವಾರೀಸುದಾರರಾಗಲಿದ್ದಾರೆ?" ಎಂದು ಮುಂತಾಗಿ ಕೇಳುತ್ತಿದ್ದರು. ಈ ಪ್ರಶ್ನೆಗಳಿಗೆ ಉತ್ತರವಾಗಿ ಈ ಅಧ್ಯಾಯವನ್ನು ಅವತೀರ್ಣಗೊಳಿಸಲಾಗಿದೆ.
2. ಅರ್ಥಾತ್- ಯಾರನ್ನು ನೀವು ಸ್ವತಃ ಅಲ್ಲಾಹ್ ಎಂಬ ಹೆಸರಿನಿಂದ ಅರಿತಿದ್ದೀರೋ ಮತ್ತು ಯಾರನ್ನು ನಿಮ್ಮ ಮತ್ತು ಸಕಲ ಸೃಷ್ಟಿಗಳ ಸೃಷ್ಟಿಕರ್ತ ಮತ್ತು ಪಾಲಕ ಎಂದು ಭಾವಿಸುತ್ತೀರೋ ಅವನೇ ನನ್ನ ಪ್ರಭು. ಬಹುದೇವವಿಶ್ವಾಸಿಗಳು ದೇವನ ಬಗ್ಗೆ ಯಾವ ರೀತಿಯ ವಿಶ್ವಾಸವನ್ನು ಹೊಂದಿದ್ದರೆಂದು ಕುರ್‌ಆನಿನ ಹಲವೆಡೆಗಳಲ್ಲಿ ವಿವರಿಸಲಾಗಿದೆ. ಉದಾ: ನೋಡಿರಿ. ಯೂನುಸ್, ಸೂಕ್ತ 22, 23, 31 ಬನೀಇಸ್ರಾಈಲ್ ಸೂಕ್ತ 67, ಅಲ್ ಮೂಮಿನೂನ್ ಸೂಕ್ತ 84ರಿಂದ 89, ಅಲ್ ಅಂಕಬೂತ್ ಸೂಕ್ತ 61ರಿಂದ 63, ಅಝ್ಝುಖ್‌ರುಫ್ ಸೂಕ್ತ 87.
3. ಇಲ್ಲಿ 'ವಾಹಿದ್'ನ ಬದಲಿಗೆ 'ಅಹದ್' ಎಂಬ ಪದ ಉಪಯೋಗಿಸಲಾಗಿದೆ. ಆ ಎರಡೂ ಪದಗಳ ಅರ್ಥ 'ಏಕನು' ಎಂದಾಗಿದೆ. ಆದರೆ ಅರಬಿ ಭಾಷೆಯಲ್ಲಿ 'ವಾಹಿದ್' ಎಂಬ ಪದ ತನ್ನೊಳಗೆ ಅನೇಕ ಸಮಾನ ಅಂಶಗಳನ್ನು ಹೊಂದಿರುವ ಎಲ್ಲಾ ವಸ್ತುಗಳಿಗೆ ಪ್ರಯೋಗವಾಗುತ್ತದೆ. ಉದಾಹರಣೆಗೆ ಏಕ ಮಾನವ, ಏಕ ಜನಾಂಗ, ಏಕ ರಾಷ್ಟ್ರ, ಏಕ ವಿಶ್ವ. ಇವುಗಳೆಲ್ಲವನ್ನೂ 'ವಾಹಿದ್' ಎಂದೇ ಕರೆಯಲಾಗುತ್ತದೆ. ಇದರಲ್ಲಿ ಒಂದಕ್ಕಿಂತ ಹೆಚ್ಚು ಅಂಶಗಳಿರುವುದನ್ನು ಪರಿಗಣಿಸಲಾಗಿಲ್ಲ. ಆದರೆ 'ಅಹದ್' ಎಂಬ ಪದವನ್ನು ಎಲ್ಲ ರೀತಿಯಿಂದಲೂ ಏಕೈಕವಾಗಿರುವ ಮತ್ತು ಹೆಚ್ಚಿನ ಅಂಶಗಳೇ ಇಲ್ಲದ ವಸ್ತುಗಳಿಗೆ ಪ್ರಯೋಗಿಸಲಾಗುತ್ತದೆ. ಆದ್ದರಿಂದ ಅರಬಿ ಭಾಷೆಯಲ್ಲಿ ಈ ಪದವನ್ನು ಅಲ್ಲಾಹನಿಗೆ ಮಾತ್ರ ಉಪಯೋಗಿಸಲಾಗುತ್ತದೆ.